# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಮುನಿರಾಜು ಗೌಡ ಪಿ. ಎಂ.

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 725

ಉತ್ತರಿಸಬೇಕಾದ ದಿನಾಂಕ : 22.02.2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಂತ ಸಹಕಾರ ಇಲಾಖೆಯಲ್ಲಿ ನೋಂದಾವಣೆಯಾಗಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಸಂಖ್ಯೆ ಎಷ್ಟು; | ರಾಜ್ಯದಲ್ಲಿ ದಿನಾಂಕ:31.03.2021 ರ ಅಂತ್ಯಕ್ಕೆ ಒಟ್ಟು 1828 ಗೃಹ ನಿರ್ಮಾಣ ಸಹಕಾರ ಸಂಘಗಳು ಇರುತ್ತವೆ. ಅವುಗಳಲ್ಲಿ 1187 ಕಾರ್ಯನಿರತ, 279 ಸ್ಥಗಿತ ಮತ್ತು 362 ಸಮಾಪನೆಯಲ್ಲಿರುತ್ತವೆ. ಜಿಲ್ಲಾವಾರು ಮಾಹಿತಯನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ) | ನೋಂದಾಯಿತ ಗೃಹ ನಿರ್ಮಾಣ ಸಹಕಾರ ಸಂಘಗಳ ಪೈಕಿ ಎಷ್ಟು ಗೃಹ ನಿರ್ಮಾಣ ಸಹಕಾರ ಸಂಘಗಳು ರೇರಾ (Real Estate Regulatory Authority) ದಲ್ಲಿ ನೋಂದಾಯಿಸಿಕೊಂಡಿವೆ; | ಒಟ್ಟು 05 ಸಹಕಾರ ಸಂಘಗಳು ರೇರಾ ಪ್ರಾಧಿಕಾರದಲ್ಲಿ ನೋಂದಾಯಿಸಿಕೊಂಡಿವೆ. |
| ಇ) | ನೋಂದಾಯಿತ ಗೃಹ ನಿರ್ಮಾಣ ಸಹಕಾರ ಸಂಘಗಳ ಪೈಕಿ ಹಲವಾರು ಗೃಹ ನಿರ್ಮಾಣ ಸಹಕಾರ ಸಂಘಗಳು ಹತ್ತಾರು ವರ್ಷಗಳ ಅವಧಿ ನಂತರವೂ ಅರ್ಹ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡದೆ ವಿಳಂಬ ಮಾಡುತ್ತಿದ್ದು, ಈ ರೀತಿಯ ವಿಳಂಬ/ವಂಚನೆ ವಿರುದ್ಧ ಸಾರ್ವಜನಿಕರುಗಳು ಸಹಕಾರ ಇಲಾಖೆಯಲ್ಲಿ ದೂರುಗಳನ್ನು ದಾಖಲಿಸಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ ; | ನೋಂದಾಯಿತ ಗೃಹ ನಿರ್ಮಾಣ ಸಹಕಾರ ಸಂಘಗಳ ಪೈಕಿ ಹಲವಾರು ಗೃಹ ನಿರ್ಮಾಣ ಸಹಕಾರ ಸಂಘಗಳು ಹತ್ತಾರು ವರ್ಷಗಳ ಅವಧಿ ನಂತರವೂ ಅರ್ಹ ಸದಸ್ಯರಿಗೆ ನಿವೇಶನ ಹಂಚಿಕೆ ಮಾಡದೆ ವಿಳಂಬ ಮಾಡುತ್ತಿದ್ದು, ಈ ರೀತಿಯ ವಿಳಂಬ ಮಾಡುತ್ತಿರುವ ಕುರಿತು ಇಲಾಖೆಯಲ್ಲಿ ದೂರುಗಳು ದಾಖಲಾಗಿರುತ್ತವೆ. |
| ಈ) | ಬಂದಿದ್ದಲ್ಲಿ ಗೃಹ ನಿರ್ಮಾಣ ಸಹಕಾರಿ ಸಂಘಗಳ ವಿರುದ್ಧ ಎಷ್ಟು ದೂರುಗಳು ದಾಖಲಾಗಿವೆ; | ಒಟ್ಟು 72 ಗೃಹ ನಿರ್ಮಾಣ ಸಹಕಾರ ಸಂಘಗಳ ವಿರುದ್ಧ ನಿವೇಶನ ನೀಡುವಲ್ಲಿ ವಿಳಂಬ ಮಾಡುತ್ತಿರುವ ಕುರಿತು ದೂರುಗಳು ದಾಖಲಾಗಿವೆ. |
| ಉ) | ನಿವೇಶನ ಹಂಚಿಕೆಯಲ್ಲಿ ವಿಳಂಬ ಹಾಗೂ ವಂಚನೆ ಬಗ್ಗೆ ಹೂಡಿಕೆದಾರರಿಂದ ದೂರು ದಾಖಲಿಸಲ್ಪಟ್ಟಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಪೈಕಿ ಕೇಂದ್ರ ಹಾಗೂ ರಾಜ್ಯ ಸರ್ಕಾರಕ್ಕೆ ಸೇರಿದ ವಿವಿಧ ಇಲಾಖೆಗಳ ನೌಕರರ ಗೃಹ ನಿರ್ಮಾಣ ಸಹಕಾರ | ನಿವೇಶನ ಹಂಚಿಕೆಯಲ್ಲಿ ವಿಳಂಬ ಹಾಗೂ ವಂಚನೆ ಬಗ್ಗೆ ಹೂಡಿಕೆದಾರರಿಂದ ದೂರು ದಾಖಲಿಸಲ್ಪಟ್ಟ ಗೃಹ ನಿರ್ಮಾಣ ಸಹಕಾರ ಸಂಘಗಳ ಪೈಕಿ, ಕೇಂದ್ರ ಹಾಗೂ ರಾಜ್ಯ ಸರ್ಕಾರದ ನೌಕರ ಸದಸ್ಯರನ್ನು ಹೊಂದಿರುವ 26 ಗೃಹ ನಿರ್ಮಾಣ ಸಹಕಾರ ಸಂಘಗಳನ್ನು |

| | | |
|---|---|---|
| | ಸಂಘಗಳು ಇರುತ್ತದೆಯೇ; ಇದ್ದಲ್ಲಿ, ಅಂತಹ ಸಂಘಗಳು ಯಾವುವು (ವಿವರ ನೀಡುವುದು) | ಒಳಗೊಂಡಿರುತ್ತವೆ. ಮಾಹಿತಿಯನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |
| **ಊ)** | ಹಲವಾರು ವರ್ಷಗಳ ವಿಳಂಬದ ನಂತರವೂ ಅರ್ಹ ಹೂಡಿಕೆದಾರರಿಗೆ ನಿವೇಶನ ಹಂಚಿಕೆ ಮಾಡದೆ ಸತಾಯಿಸುತ್ತಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ವಿರುದ್ಧ ಸರ್ಕಾರ ಏನು ಕ್ರಮ ಕೈಗೊಂಡಿದೆ? | ಸಹಕಾರ ಸಂಘಗಳು ಅಭಿವೃದ್ಧಿದಾರರೊಂದಿಗೆ ಕರಾರು ಮಾಡಿಕೊಂಡು ಮೊದಲಿಗೆ ಜಮೀನು ಖರೀದಿಸುತ್ತವೆ ಬಡಾವಣೆಗೆ ಗುರುತಿಸಿರುವ ಸರ್ವೆ ನಂಬರುಗಳ ಪೈಕಿ ಕೆಲವು ಭೂಮಾಲೀಕರು ವಿವಿಧ ನ್ಯಾಯಾಲಯದಲ್ಲಿ ದಾವೆಗಳನ್ನು ಹೂಡುವುದರಿಂದ ಪ್ರಕರಣಗಳು ಇತ್ಯರ್ಥವಾಗುವುದಕ್ಕೆ ಸಾಕಷ್ಟು ಕಾಲಾವಕಾಶ ಬೇಕಾಗುತ್ತದೆ. ನಂತರದಲ್ಲಿ ಸದರಿ ಜಮೀನನ್ನು ಭೂ ಪರಿವರ್ತನೆ ಮಾಡುವುದು ಮತ್ತು ವಿವಿಧ ಪ್ರಾಧಿಕಾರಗಳಿಂದ ಅನುಮತಿ ಪಡೆದು ಬಡಾವಣೆ ರಚಿಸಲು ನೀಲನಕ್ಷೆಗೆ ಅನುಮೋದನೆ ಪಡೆದು ನಂತರ ಸಕ್ಷಮ ಪ್ರಾಧಿಕಾರದಿಂದ ನಿವೇಶನಗಳು ಬಿಡುಗಡೆಯಾದ ನಂತರ ಹಂಚಿಕೆಗೆ ಲಭ್ಯವಾಗುತ್ತವೆ. ನಿವೇಶನಗಳು ಲಭ್ಯವಿದ್ದು, ಅರ್ಹ ಸದಸ್ಯರಿಗೆ ನಿವೇಶನ ಹಂಚಲು ಸತಾಯಿಸುತ್ತಿರುವ, ಪ್ರಕರಣಗಳಲ್ಲಿ ಕಲಂ 70ರಡಿ ದಾಖಲಾಗುವ ದಾವೆಗಳನ್ನು ಇತ್ಯರ್ಥ ಮಾಡಲಾಗುತ್ತಿದೆ. ಮುಂದುವರೆದು ಗಂಭೀರ ಸ್ವರೂಪದ ಆರೋಪಗಳ/ ಅವ್ಯವಹಾರಗಳ ಕುರಿತು ವರದಿಯಾಗುವ ಅಂಶಗಳ ಕುರಿತು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 64 ರಡಿ ವಿಚಾರಣೆ ಹಾಗೂ ಕಲಂ 65ರ ಪರಿವೀಕ್ಷಣೆಯನ್ನು ನಡೆಸಿ ವರದಿಯನ್ವಯ ಕಾನೂನು ಕ್ರಮ ಕೈಗೊಳ್ಳಲಾಗುತ್ತಿದೆ. |

**ಸಿಒ 06 ಸಿಹೆಚ್‌ಎಸ್ 2022 (ಇ)**

**(ಎಸ್. ಟಿ. ಸೋಮಶೇಖರ್)**

**ಸಹಕಾರ ಸಚಿವರು**

## ಅನುಬಂಧ-1

**ದಿನಾಂಕ:31-03-2021 ಕ್ಕೆ ಇದ್ದಂತೆ ರಾಜ್ಯದಲ್ಲಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಮಾಹಿತಿ.**

| ಕ್ರ | ಜಿಲ್ಲೆಯ ಹೆಸರು | ಕಾರ್ಯ ನಿರತ | ಸ್ಥಗಿತ | ಸಮಾಪನೆ | ಒಟ್ಟು |
|---|---|---|---|---|---|
| 1 | ಬೆಂಗಳೂರು 1ನೇ ವಲಯ | 119 | 34 | 18 | 171 |
| 2 | ಬೆಂಗಳೂರು 2ನೇ ವಲಯ | 87 | 39 | 20 | 146 |
| 3 | ಬೆಂಗಳೂರು 3ನೇ ವಲಯ | 48 | 17 | 5 | 70 |
| 4 | ಬೆಂಗಳೂರು 4ನೇ ವಲಯ | 148 | 43 | 20 | 211 |
| 5 | ಬೆಂಗಳೂರು ಗ್ರಾಮಾಂತರ ಜಿಲ್ಲೆ | 5 | 8 | 9 | 22 |
| 6 | ತುಮಕೂರು ಜಿಲ್ಲೆ | 24 | 0 | 16 | 40 |
| 7 | ಚಿತ್ರದುರ್ಗ ಜಿಲ್ಲೆ | 8 | 0 | 10 | 18 |
| 8 | ದಾವಣಗೆರೆ ಜಿಲ್ಲೆ | 17 | 3 | 9 | 29 |
| 9 | ಶಿವಮೊಗ್ಗ ಜಿಲ್ಲೆ | 29 | 0 | 11 | 40 |
| 10 | ಕೋಲಾರ ಜಿಲ್ಲೆ | 5 | 11 | 14 | 30 |
| 11 | ಚಿಕ್ಕಬಳ್ಳಾಪುರ ಜಿಲ್ಲೆ | 7 | 0 | 9 | 16 |
| 12 | ರಾಮನಗರ ಜಿಲ್ಲೆ | 8 | 0 | 2 | 10 |
| 13 | ಮೈಸೂರು | 251 | 18 | 21 | 290 |
| 14 | ಚಾಮರಾಜನಗರ. | 6 | 0 | 2 | 8 |
| 15 | ಮಂಡ್ಯ | 34 | 0 | 8 | 42 |
| 16 | ಹಾಸನ | 16 | 7 | 12 | 35 |
| 17 | ಚಿಕ್ಕಮಗಳೂರು | 9 | 0 | 2 | 11 |
| 18 | ಕೊಡಗು | 1 | 0 | 0 | 1 |
| 19 | ದಕ್ಷಿಣ ಕನ್ನಡ | 21 | 1 | 2 | 24 |
| 20 | ಉಡುಪಿ | 8 | 0 | 1 | 9 |
| 21 | ಬೆಳಗಾವಿ | 75 | 10 | 20 | 105 |
| 22 | ವಿಜಯಪುರ | 24 | 1 | 23 | 48 |
| 23 | ಬಾಗಲಕೋಟ | 22 | 4 | 8 | 34 |
| 24 | ಧಾರವಾಡ | 91 | 21 | 19 | 131 |
| 25 | ಗದಗ | 20 | 3 | 6 | 29 |
| 26 | ಹಾವೇರಿ | 11 | 1 | 9 | 21 |
| 27 | ಕಾರವಾರ | 13 | 0 | 3 | 16 |
| 28 | ಬಳ್ಳಾರಿ | 16 | 2 | 21 | 39 |
| 29 | ಬೀದರ | 9 | 13 | 23 | 45 |
| 30 | ಕಲಬುರಗಿ | 22 | 20 | 24 | 66 |
| 31 | ಕೊಪ್ಪಳ | 8 | 8 | 5 | 21 |
| 32 | ರಾಯಚೂರು | 19 | 13 | 6 | 38 |
| 33 | ಯಾದಗಿರಿ | 6 | 2 | 4 | 12 |
| ಒಟ್ಟು | | **1187** | **279** | **362** | **1828** |

ಸಹಕಾರ ಸಂಘಗಳ ಅಪರ ನಿಬಂಧಕರು
(ವಸತಿ ಮತ್ತು ಇತರೆ)

## ಅನುಬಂಧ-02

| ಕ್ರ.ಸಂ | ಸಂಘದ ಹೆಸರು |
|---|---|
| 1. | ದಿ ಕಸ್ಟಮ್ಸ್, ಸೆಂಟ್ರಲ್ ಎಕ್ಸಜ್ ಮತ್ತು ಸರ್ವಿಸ್ ಟ್ಯಾಕ್ಸ್, ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ,. ಬೆಂಗಳೂರು. |
| 2. | ಪೋಲೀಸ್ ಅಧಿಕಾರಿಗಳ ಮತ್ತು ಸಿಬ್ಬಂದಿಯವರ ಗೃಹ ನಿರ್ಮಾಣ ಸಹಕಾರ ಸಂಘ ನಿ., ನಂ.113, 3ನೇ ಮಹಡಿ, ಎಸ್.ಬಿ.ಎಂ ಬ್ಯಾಂಕ್ ಮುಖ್ಯ ಕಛೇರಿ ಹಿಂಭಾಗ, ಹಾಸ್ಪಿಟಲ್ ರಸ್ತೆ, ಬೆಂಗಳೂರು ವಿಳಾಸ: ಶಿವಾನಂದ ಸರ್ಕಲ್ ಹತ್ತಿರ, ಶೇಶಾದ್ರಿಪುರಂ, ಬೆಂಗಳೂರು. |
| 3. | ಟೆಲಿಕಾಂ ಎಂಪ್ಲಾಯೀಸ್ ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ ಲಿ., ಬೆಂಗಳೂರು |
| 4. | ವಿಶಾಲ ಕರ್ನಾಟಕ ಗೌರ್ನಮೆಂಟ್ ಅಂಡ್ ಪ್ರೈವೇಟ್ ಎಂಪ್ಲಾಯೀಸ್ ಹೌಸಿಂಗ್ ಕೋ-ಆಪ್‌ರೇಟಿವ್ ಸೊಸೈಟಿ ನಿ, ನಂ.456, 10 ನೇ ಎ ಕ್ರಾಸ್, ದೊಡ್ಡಗೌಡನಪಾಳ್ಯದ ಹತ್ತಿರ ಉತ್ತರಹಳ್ಳಿ ಮುಖ್ಯ ರಸ್ತೆ, ಸುಬ್ರಮಣ್ಯಪುರ ಅಂಚೆ, ಬೆಂಗಳೂರು |
| 5. | ಕರ್ನಾಟಕ ದೂರ ಸಂಪರ್ಕ ಇಲಾಖೆ ನೌಕರರ ಸಹಕಾರ ಸಂಘ ನಿ.,ಅಮಿಮಸ್ ಕ್ಯಾಶಲ್, ನಂ-706, 1ನೇ ಮಹಡಿ, ಹೆಚ್.ಎಂ.ಟಿ.ಬಡಾವಣೆ, ಆರ್.ಟಿ.ನಗರ ಅಂಚೆ, ಬೆಂಗಳೂರು-560032. |
| 6. | ಕೃಷಿ ವಿಶ್ವವಿದ್ಯಾನಿಲಯ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು |
| 7. | ಕರ್ನಾಟಕ ರಾಜ್ಯ ನ್ಯಾಯಾಂಗ ಇಲಾಖೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು |
| 8. | ಕರ್ನಾಟಕ ಪೋಸ್ಟಲ್ ಅಂಡ್ ಟೆಲಿಕಾಂ ಎಂಪ್ಲಾಯೀಸ್ ಹೌಸಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು |
| 9. | ರೈಲ್ವೆಮನ್ ಗೃಹ ನಿರ್ಮಾಣ ಸಹಕಾರ ಸಂಘ ನಿ., ಸದರನ್ ರೈಲ್ವೆ ಇನ್ಸ್ಟಿಟ್ಯೂಟ್ ಬಿಲ್ಡಿಂಗ್, ಎಂ.ಜಿ.ರೈಲ್ವೆ ಕಾಲೋನಿ, ಬೆಂಗಳೂರು-09 |
| 10. | ಕರ್ನಾಟಕ ಬಿಎಸ್ಎನ್ಎಲ್, ರೈಲ್ವೆ ಮತ್ತು ಕೇಂದ್ರ ಸರ್ಕಾರದ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ನಂ.675, 2ನೇ ಕ್ರಾಸ್, ಸುಗಪ್ಪ ಲೇಔಟ್, ಎನ್.ಇ.ಎಸ್ ಕಛೇರಿ ರಸ್ತೆ, ಆಯೋಧ್ಯ ಕಾಂಪ್ಲೆಕ್ಸ್ ಹತ್ತಿರ, ಯಲಹಂಕ, ಬೆಂಗಳೂರು-64 |
| 11. | ಬಿಎಸ್ಎನ್ಎಲ್ ಇನ್‌ಫಾರ್ಮೇಷನ್ ಟೆಕ್ನಾಲಜಿ ಪಿಎಸ್‌ಯು ಅಂಡ್ ಅದರ್ಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ದೇವನಹಳ್ಳಿ ಬೆಂಗಳೂರು |
| 12. | ಮಿನಿಸ್ಟ್ರಿ ಆಫ್ ಕಮುನಿಕೇಷನ್ ಎಂಪ್ಲಾಯೀಸ್ ಕೋ-ಆಪರೇಟಿವ್ ಹೌಸಿಂಗ್ ಸೊಸೈಟಿ ಲಿಮಿಟೆಡ್, ಬೆಂಗಳೂರು |
| 13. | ವಿಧಾನಮಂಡಲ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. ಬೆಂಗಳೂರು |
| 14. | ಸಚಿವಾಲಯ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ. ಬೆಂಗಳೂರು |
| 15. | ರಾಜ್ಯ ಸರ್ಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಕೋಲಾರ |

| | |
|---|---|
| 16. | ಕರ್ನಾಟಕ ಗೌರ್ನಮೆಂಟ್ ಗ್ರೂಪ್ ಡಿ ನೌಕರರ ಸಹಕಾರ ಸಂಘ ನಿಯಮಿತ. ಬೆಂಗಳೂರು |
| 17. | ಸರ್ಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು |
| 18. | ಕಾಲೇಜು ಅಧ್ಯಾಪಕರ ಶಾಲಾ ಶಿಕ್ಷಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು |
| 19. | ಮೈಸೂರು ಚಾಮರಾಜನಗರ ಜಿಲ್ಲಾ ಖಜಾನೆ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು |
| 20. | ಕರ್ನಾಟಕ ರಾಜ್ಯ ಸರ್ಕಾರಿ ಡಿ ಗ್ರೂಪ್ ನೌಕರರ ಕ್ಷೇಮಾಭಿವೃದ್ಧಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು |
| 21. | ಕರ್ನಾಟಕ ಪೊಲೀಸ್ ಗೃಹ ನಿರ್ಮಾಣ ಸಹಕಾರ ಸಂಘ ನಿ, ಮೈಸೂರು |
| 22. | ಹಾಸನ ಜಿಲ್ಲಾ ರಾಜ್ಯ ಸರ್ಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಹಾಸನ |
| 23. | ಮೈಸೂರು ವಿಶ್ವವಿದ್ಯಾನಿಲಯ ಯ ಉದ್ಯೋಗಿಗಳ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು |
| 24. | ರೀಜನಲ್ ಕಾಲೇಜು ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ,. ಮೈಸೂರು |
| 25. | ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಕಂದಾಯ ಇಲಾಖಾ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು |
| 26. | ಸೌತ್ ವೆಸ್ಟರ್ನ್ ರೈಲ್ವೆ ಎಂಪ್ಲಾಯೀಸ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ಲಿ., ಮೈಸೂರು. |

ಸಹಕಾರ ಸಂಘಗಳ ಅಪರ ನಿಬಂಧಕರು
(ವಸತಿ ಮತ್ತು ಇತರೆ)